# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 737(790) |
| ಸದಸ್ಯರ ಹೆಸರು | : | ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 20/12/2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪದವಿ ಪೂರ್ವ ಶಿಕ್ಷಣದ ವೃತ್ತಿ ಶಿಕ್ಷಣ (ಜೆ.ಓ.ಸಿ) ಕೋರ್ಸ್‌ಗಳನ್ನು ಯಾವಾಗ ರದ್ದುಪಡಿಸಲಾಯಿತು; (ಮಾಹಿತಿ ನೀಡುವುದು) | 1977ರಲ್ಲಿ ವೃತ್ತಿ ಶಿಕ್ಷಣ ಕೋರ್ಸುಗಳನ್ನು ಪ್ರಾರಂಭಿಸಲಾಯಿತು. 2010-11ನೇ ಸಾಲಿನಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ:ಇಡಿ 29 ಟಿವಿಇ 2010, ದಿನಾಂಕ:07.05.2010ರಂತೆ ವೃತ್ತಿ ಶಿಕ್ಷಣ ಕೋರ್ಸುಗಳನ್ನು ರದ್ದುಪಡಿಸಲಾಯಿತು. |
| ಆ) | ಈ ಕೋರ್ಸ್‌ನ್ನು ಮುಚ್ಚಿದಾಗ ಇಲ್ಲಿ ಎಷ್ಟು ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿದ್ದರು; (ಮಾಹಿತಿ ನೀಡುವುದು) | ಜೆ.ಓ.ಸಿ ಕೋರ್ಸುಗಳನ್ನು ಮುಚ್ಚಿದಾಗ 3746 ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿದ್ದರು.<br>ಸರ್ಕಾರಿ - 1524<br>ಅನುದಾನಿತ - 2110<br>ಅನುದಾನ ರಹಿತ - 112<br>ಒಟ್ಟು = 3746 |
| ಇ) | ಈ ಸಿಬ್ಬಂದಿಗಳನ್ನು ಸರ್ಕಾರದ ವಿವಿಧ ಇಲಾಖೆಗಳಲ್ಲಿ ಯಾವಾಗ ವಿಲೀನಗೊಳಿಸಲಾಯಿತು; ವಿಲೀನಗೊಳಿಸಲು ಅನುಸರಿಸಿದ ಮಾನದಂಡಗಳೇನು; (ಮಾಹಿತಿ | ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮ, 2011ರ ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 22 ಶಾಸನ 2011, ದಿನಾಂಕ:06.4.2011ರನ್ವಯ ವಿವಿಧ ಇಲಾಖೆಗಳಲ್ಲಿ |

| | | |
|---|---|---|
| | ನೀಡುವುದು) | ವಿಲೀನಗೊಳಿಸಲಾಯಿತು.<br><br>ಜೆ.ಓ.ಸಿ. ವಿಲೀನ ವಿಧೇಯಕ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 22 ಶಾಸನ 2011, ದಿನಾಂಕ: 06/04/2011ರನ್ವಯ ದಿನಾಂಕ:06/04/2011ಕ್ಕೆ<br>(ಎ) ಯಾವೊಬ್ಬ, ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನನ್ನು ಆತನಿಗೆ ನೇರವಾಗಿ ಅನ್ವಯಿಸಬಹುದಾದಂಥ ಕಾರಣಗಳಿಗಾಗಿ ಆತನು ಯಾವುದೇ ಸೇವಾಭಂಗವಿಲ್ಲದೆ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ನಿರಂತರವಾಗಿ ಕರ್ತವ್ಯ ನಿರ್ವಹಿಸಿದವರನ್ನು ಮಾತ್ರ ವಿಲೀನಕ್ಕೆ ಪರಿಗಣಿಸಲಾಗಿದೆ.<br>(ಬಿ) ಯಾವೊಬ್ಬ, ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನನ್ನು ಸಂಬಂಧಿಸಿದ ನೇಮಕಾತಿಯ ಸೂಕ್ತ ನಿಯಮಗಳಡಿಯಲ್ಲಿ ಆ ಹುದ್ದೆಗಾಗಿ ನಿಯಮಿಸಲಾದ ವಿದ್ಯಾರ್ಹತೆಯನ್ನು ವಿಲೀನದ ದಿನಾಂಕದಂದು ಹೊಂದಿದವರನ್ನು ವಿಲೀನಕ್ಕೆ ಪರಿಗಣಿಸಲಾಗಿದೆ. |
| ಈ) | 5 ವರ್ಷಗಳಿಗಿಂತ ಕಡಿಮೆ ಸೇವೆ ಸಲ್ಲಿಸಿದ ಸಿಬ್ಬಂದಿಗಳು ಈ ವಿಲೀನ ಪ್ರಕ್ರಿಯೆಯಿಂದ ಹೊರಗುಳಿದಿರುವುದು ಸರ್ಕಾರದ | ಬಂದಿದೆ. |

| | | |
|---|---|---|
| | ಗಮನಕ್ಕೆ ಬಂದಿದೆಯೇ; | |
| ಉ) | ಬಂದಿದ್ದಲ್ಲಿ, ಈ ವಿಧೇಯಕಕ್ಕೆ ತಿದ್ದುಪಡಿ ತಂದು 5 ವರ್ಷಗಳಿಗಿಂತ ಕಡಿಮೆ ಸೇವೆ ಸಲ್ಲಿಸಿರುವ ಜೆ.ಓ.ಸಿ ಸಿಬ್ಬಂದಿಗಳನ್ನು ಸಹ ವಿವಿಧ ಇಲಾಖೆಗಳಲ್ಲಿ ವಿಲೀನಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ಮಾಹಿತಿ ನೀಡುವುದು) | ಜೆ.ಓ.ಸಿ. ವಿಲೀನ ವಿಧೇಯಕ ದಿನಾಂಕ:06.04.2011ರ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 22 ಶಾಸನ 2011ರಲ್ಲಿನ ನಿಯಮ 3(1)(ಎ)ರಲ್ಲಿ ಯಾವೊಬ್ಬ, ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನನ್ನು ಆತನಿಗೆ ನೇರವಾಗಿ ಅನ್ವಯಿಸಬಹುದಾದಂಥ ಕಾರಣಗಳಿಗಾಗಿ ಆತನು ಯಾವುದೇ ಸೇವಾಭಂಗವಿಲ್ಲದೆ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ನಿರಂತರವಾಗಿ ಕರ್ತವ್ಯ ನಿರ್ವಹಿಸಿದ್ದ ಹೊರತು ವಿಲೀನಗೊಳಿಸತಕ್ಕದ್ದಲ್ಲ ಎಂದು ತಿಳಿಸಲಾಗಿದೆ. ಅದರಂತೆ, ದಿನಾಂಕ:06.04.2011ಕ್ಕೆ ಯಾವುದೇ ಸೇವಾಭಂಗವಿಲ್ಲದೆ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ನಿರಂತರವಾಗಿ ಕರ್ತವ್ಯ ನಿರ್ವಹಿಸಿದವರನ್ನು ಮಾತ್ರ ವಿಲೀನಕ್ಕೆ ಪರಿಗಣಿಸಲಾಗಿದೆ.<br><br>ಜೆ.ಓ.ಸಿ. ವಿಲೀನ ವಿಧೇಯಕ ದಿನಾಂಕ:06.04.2011ರ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 22 ಶಾಸನ 2011ರಲ್ಲಿನ ನಿಯಮ 6(1)ರಲ್ಲಿ ಈ ಅಧಿನಿಯಮ ಆರಂಭವಾದ ದಿನಾಂಕದಂದು ಐದು ವರ್ಷಗಳ ಸೇವೆಯನ್ನು ಪೂರ್ಣಗೊಳಿಸದ ಅರೆಕಾಲಿಕ ವೃತ್ತಿ ಶಿಕ್ಷಣ ಆಧಾರಿತ ಕೋರ್ಸುಗಳ ನೌಕರರನ್ನು ಯಾವುದೇ ಸರ್ಕಾರಿ ಸೇವೆಯಲ್ಲಿ ಅಥವಾ ಯಾವುದೇ ಖಾಸಗಿ ಅನುದಾನಿತ ಸಂಸ್ಥೆಯಲ್ಲಿ ಮುಂದುವರೆಸತಕ್ಕದ್ದಲ್ಲ ಅಥವಾ ವಿಲೀನಗೊಳಿಸತಕ್ಕದ್ದಲ್ಲ ಎಂದು ತಿಳಿಸಲಾಗಿದೆ. ಆದ್ದರಿಂದ, ದಿನಾಂಕ:06.04.2011ಕ್ಕೆ |

| | | |
|---|---|---|
| | | ನಿರಂತರವಾಗಿ ಐದು ವರ್ಷ ಪೂರೈಸದ 530 ಜೆ.ಓ.ಸಿ ಬೋಧಕ ಮತ್ತು ಬೋಧಕೇತರರನ್ನು ವಿಲೀನಕ್ಕೆ ಪರಿಗಣಿಸಲು ಅವಕಾಶವಿರುವುದಿಲ್ಲ. ಈಗಾಗಲೇ ಸದರಿಯವರುಗಳನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಲಾಗಿದೆ.<br><br>ಮಾನ್ಯ ಸರ್ವೋಚ್ಚ ನ್ಯಾಯಾಲಯದ ಅಪೀಲು (ಸಿವಿಲ್) 3595-3612 of 1999 ದಿನಾಂಕ:10.04.2006ರ ರಾಜ್ಯ ಸರ್ಕಾರ ಮತ್ತು ಇತರರು ವಿರುದ್ಧ ಉಮಾದೇವಿ ಮತ್ತು ಇತರರು ಪ್ರಕರಣದಲ್ಲಿ ಒಂದು ಬಾರಿ ಕ್ರಮವಾಗಿ ಕ್ರಮಬದ್ಧಗೊಳಿಸಲು ಅವಕಾಶ ನೀಡಿ ಆದೇಶಿಸಿದ್ದು, ಅಂತಹ ವಿಲೀನ/ಕ್ರಮಬದ್ಧಗೊಳಿಸುವಿಕೆಯ ನಿಯಮಗಳನ್ನು ಮತ್ತೊಮ್ಮೆ ಯಾವುದೇ ತಿದ್ದುಪಡಿ ಮಾಡಬಾರದೆಂದು ಸ್ಪಷ್ಟ ನಿರ್ದೇಶನ ನೀಡಿರುವುದರಿಂದ, ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ವಿಧೇಯಕ-2011ಕ್ಕೆ ಮತ್ತೆ ತಿದ್ದುಪಡಿ ಮಾಡಲು ಅವಕಾಶವಿರುವುದಿಲ್ಲ. |

**ಸಂಖ್ಯೆ: ಇಪಿ 69 ಟಿವಿಇ 2021**

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು